# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 952
ಸದಸ್ಯರ ಹೆಸರು : ಶ್ರೀ.ಐವನ್ ಡಿಸೋಜಾ (ನಾಮನಿರ್ದೇಶಿತರು)
ಉತ್ತರಿಸುವ ದಿನಾಂಕ : 17.12.2018
ಉತ್ತರಿಸುವ ಸಚಿವರು : ಪಶು ಸಂಗೋಪನೆ ಮತ್ತು ಮೀನುಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಎಷ್ಟು ಲೀಟರ್ ಹಾಲು ಉತ್ಪಾದನೆ ಆಗುತ್ತಿದೆ (ವಿವರ ಒದಗಿಸುವುದು) ರಾಜ್ಯದಲ್ಲಿ ಹಾಲಿನ ಬೇಡಿಕೆ ಎಷ್ಟು; ಹಾಲು ಉತ್ಪಾದಕರಿಗೆ ಸರ್ಕಾರದಿಂದ ನೀಡುವ ಸಬ್ಸಿಡಿ ರೈತರಿಗೆ ಪಾವತಿಸಲಾಗಿದೆಯೇ? 2017-18 ರಲ್ಲಿ ನೀಡಲಾದ ಸಬ್ಸಿಡಿ ಎಷ್ಟು; ಬಾಕಿ ಇರುವ ಸಬ್ಸಿಡಿ ಎಷ್ಟು? (ವಿವರ ನೀಡುವುದು) | ಕರ್ನಾಟಕ ಹಾಲು ಮಹಾಮಂಡಳಿಯ ವ್ಯಾಪ್ತಿಯಲ್ಲಿ ಪ್ರಸ್ತುತ ಸರಾಸರಿ ದಿನಂಪ್ರತಿ 76.49 ಲಕ್ಷ ಕೆ.ಜಿ. ಹಾಲು ಸಂಗ್ರಹಿಸಲಾಗುತ್ತಿದೆ.<br><br>ಕರ್ನಾಟಕ ರಾಜ್ಯದ ನಗರ ಹಾಗೂ ಪಟ್ಟಣ ಪ್ರದೇಶದಲ್ಲಿ ಒಟ್ಟಾರೆ ದಿನವಹಿ 69 ಲಕ್ಷ ಲೀ. ಹಾಲಿನ ಬೇಡಿಕೆ ಇರುತ್ತದೆ. ಕರ್ನಾಟಕ ಹಾಲು ಮಹಾಮಂಡಳಿವತಿಯಿಂದ ರಾಜ್ಯದಲ್ಲಿ ದಿನವಹಿ 45 ಲಕ್ಷ ಲೀ. ಹಾಲು ಮಾರಾಟ ಮಾಡಲಾಗುತ್ತಿದೆ.<br><br>ಹೊರ ರಾಜ್ಯಗಳಲ್ಲಿ ದಿನವಹಿ ಹಾಲಿನ ಮಾರಾಟ 8.0 ಲಕ್ಷ ಲೀ. ಮಾರಾಟ ಮಾಡಲಾಗುತ್ತಿದೆ. ಕ್ಷೀರಭಾಗ್ಯ ಯೋಜನೆಗೆ ದಿನವಹಿ 7.0 ಲಕ್ಷ ಲೀ., ಹಾಲಿನ ಇತರೇ ಉತ್ಪನ್ನಗಳಿಗೆ ದಿನವಹಿ 3.0 ಲಕ್ಷ ಲೀ. ಬಳಸಲಾಗುತ್ತಿದೆ. ಹಾಗೂ ಉಳಿಕೆ 13.49 ಲಕ್ಷ ಲೀ.ಹಾಲನ್ನು ಹಾಲಿನ ಪುಡಿ ಪರಿವರ್ತನೆ ಮಾಡಲಾಗುತ್ತಿದೆ.<br><br>ಹಾಲು ಉತ್ಪಾದಕರಿಗೆ ಸರ್ಕಾರದಿಂದ ನೀಡುವ ಪ್ರೋತ್ಸಾಹಧನವನ್ನು ರೈತರಿಗೆ ಪಾವತಿಸಲಾಗಿದೆ. 2017-18ನೇ ಸಾಲಿನಲ್ಲಿ ಹಾಲು ಉತ್ಪಾದಕರಿಗೆ ಒಟ್ಟು ರೂ.1131.58 ಕೋಟಿ ಪ್ರೋತ್ಸಾಹಧನ ಪಾವತಿಸಲಾಗಿದೆ. ಪ್ರೋತ್ಸಾಹ ಧನವು ಬಾಕಿ ಇರುವುದಿಲ್ಲ. 2018-19ನೇ ಸಾಲಿನಲ್ಲಿ ಅಗಸ್ಟ್-2018ರ ವರೆಗೆ ರೂ.702.11 ಕೋಟಿಗಳ ಪ್ರೋತ್ಸಾಹಧನವನ್ನು ಹಾಲು ಉತ್ಪಾದಕರಿಗೆ ಪಾವತಿಸಲಾಗಿದೆ. |
| ಆ) | ಹಾಲಿನಿಂದ ತಯಾರಿಸಲಾಗುವ ಉತ್ಪನ್ನಗಳಿಗೆ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಬೇಡಿಕೆ ಇದೆಯೇ; ಯಾವ-ಯಾವ ಉತ್ಪನ್ನಗಳನ್ನು ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮಾರಾಟ ಮಾಡಲಾಗುತ್ತಿದೆ; ವಿವರ ನೀಡುವುದು. | ಅಂತರಾಷ್ಟ್ರೀಯ ಮಟ್ಟದಲ್ಲಿ ಅಧಿಕ ಪ್ರಮಾಣದ ಹಾಲು ಉತ್ಪಾದನೆಯಾಗುತ್ತಿರುವುದರಿಂದ ಹಾಲು ಮತ್ತು ಹಾಲಿನ ಉತ್ಪನ್ನಗಳಿಗೆ ಬೇಡಿಕೆ ಕುಸಿದಿರುವ ಹಿನ್ನೆಲೆಯಲ್ಲಿ ನಂದಿನಿ ಉತ್ಪನ್ನಗಳಿಗೆ ಅಂತರ ರಾಷ್ಟ್ರೀಯ ಮಟ್ಟದಲ್ಲಿ ಅಲ್ಪ ಪ್ರಮಾಣದಲ್ಲಿ ಬೇಡಿಕೆ ಇರುತ್ತದೆ.<br><br>ಪ್ರಸ್ತುತ ನಂದಿನಿ ಯು.ಹೆಚ್.ಟಿ. ಹಾಲು, ತುಪ್ಪ, ಟೆಟ್ರಾ ಪ್ಯಾಕ್ ಸುವಾಸಿತ ಹಾಲು ಹಾಗೂ ಸಿಹಿ ಉತ್ಪನ್ನಗಳನ್ನು ರಫ್ತು ಮಾಡಲಾಗುತ್ತಿದೆ.<br><br>2018-19 ರ ಸಾಲಿನಲ್ಲಿ ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮಧ್ಯಪ್ರಾಚ್ಯ ದೇಶಗಳು, ಮಾಲ್ಡೀವ್ಸ್, ಬಾಂಗ್ಲಾದೇಶ ಮತ್ತು ಆಸ್ಟ್ರೇಲಿಯ ಗಳಿಗೆ ಮಾರಾಟ |

<table>
<tr><td></td><td></td><td>ಮಾಡಲಾಗಿರುವ ಹಾಲು ಹಾಗೂ ಹಾಲಿನ ಉತ್ಪನ್ನಗಳ ವಿವರ ಈ ಕೆಳಕಂಡಂತಿದೆ.<br>
<table>
<tr><th>ಕ್ರ.ಸಂ.</th><th>ವಿವರ</th><th>ಪರಿಮಾಣ</th></tr>
<tr><td>1</td><td>ಯು.ಹೆಚ್.ಟಿ. ಹಾಲು</td><td>66,000 ಲೀ.ಪ್ರತಿ ಮಾಹೆ</td></tr>
<tr><td>2</td><td>ಟೆಟ್ರಾ ಪ್ಯಾಕ್ ಸುವಾಸಿತ ಹಾಲು</td><td>10,000 ಲೀ.</td></tr>
<tr><td>3</td><td>ತುಪ್ಪ</td><td>20 ಮೆ.ಟನ್.</td></tr>
<tr><td>4</td><td>ಸಿಹಿ ಉತ್ಪನ್ನಗಳು</td><td>1.2 ಮೆ.ಟನ್.</td></tr>
<tr><td>5</td><td>ಕೆನೆ ರಹಿತ ಹಾಲಿನ ಪುಡಿ</td><td>100 ಮೆ.ಟನ್</td></tr>
</table></td></tr>
<tr><td>ಇ)</td><td>ಮಕ್ಕಳಿಗೆ ಮಧ್ಯಾಹ್ನ ಕ್ಷೀರಭಾಗ್ಯ ಯೋಜನೆಗೆ ರಾಜ್ಯದಲ್ಲಿ ಎಷ್ಟು ಹಾಲು ಬಳಕೆಯಾಗುತ್ತಿದೆ, ಇದಕ್ಕೆ ತಗಲುವ ವೆಚ್ಚ ಎಷ್ಟು; (ವಿವರ ನೀಡುವುದು)</td><td>ಕ್ಷೀರ ಭಾಗ್ಯ ಯೋಜನೆಗೆ ದಿನಂಪ್ರತಿ ಅಂದಾಜು 7 ಲಕ್ಷ ಲೀಟರ್ ಹಾಲನ್ನು ಬಳಸಲಾಗುತ್ತಿದೆ. ಮಾಹೆಯಾನ ಇದಕ್ಕೆ ತಗಲುವ ಅಂದಾಜು ವೆಚ್ಚ ರೂ.77.00 ಕೋಟಿಗಳಾಗಿರುತ್ತದೆ.</td></tr>
<tr><td>ಈ)</td><td>ರಾಜ್ಯದ ಹಾಲು ಉತ್ಪಾದನೆ ಯೂನಿಯನ್‌ಗಳಲ್ಲಿ ಗುತ್ತಿಗೆ ಆಧಾರದಲ್ಲಿ ಎಷ್ಟು ಕಾರ್ಮಿಕರು ಕೆಲಸ ನಿರ್ವಹಿಸುತ್ತಿದ್ದಾರೆ, ಅವರನ್ನು ಖಾಯಂಗೊಳಿಸಲು ಇಲಾಖೆಯ ಮುಂದೆ ಪ್ರಸ್ತಾವನೆ ಇದೆಯೇ: ವಿವರ ನೀಡುವುದು.</td><td>ಕರ್ನಾಟಕ ಹಾಲು ಮಹಾಮಂಡಳಿ ವ್ಯಾಪ್ತಿಯಲ್ಲಿನ 14 ಜಿಲ್ಲಾ ಹಾಲು ಒಕ್ಕೂಟಗಳಲ್ಲಿ ಗುತ್ತಿಗೆ ಆಧಾರದಲ್ಲಿ ಒಟ್ಟು 8262 ಕಾರ್ಮಿಕರು ಕೆಲಸ ನಿರ್ವಹಿಸುತ್ತಿದ್ದಾರೆ. ಇವರನ್ನು ಖಾಯಂಗೊಳಿಸಲು ಸರ್ಕಾರದ ಮುಂದೆ ಯಾವುದೇ ಪ್ರಸ್ತಾವನೆ ಇರುವುದಿಲ್ಲ.</td></tr>
</table>

**ಸಂ: ಪಸಂಮೀ 179 ಸಲೆವಿ 2018**

**(ವೆಂಕಟರಾವ್ ನಾಡಗೌಡ)**

**ಪಶುಸಂಗೋಪನೆ ಹಾಗೂ ಮೀನುಗಾರಿಕೆ ಸಚಿವರು**